ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಸೋಮವಾರ, ದಿನಾಂಕ : 21 ನೇ ಸೆಪ್ಟೆಂಬರ್, 2020

ಅತಿಥಿ ಶಿಕ್ಷಕರು/ಉಪನ್ಯಾಸಕರಿಗೆ ಕೊರೊನಾ ರಜಾ ಅವಧಿಯನ್ನು ಸೇವಾವಧಿ ಎಂದು ಪರಿಗಣಿಸುವ ಬಗ್ಗೆ

ಶ್ರೀ ಬಸವರಾಜ ಶಿವಲಿಂಗಪ್ಪ ಹೊರಟ್ಟಿ(ಶಿಕ್ಷಕರ ಕ್ಷೇತ್ರ) -

11 (101) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ -

(ಅ) ಕೊರೋನ ಲಾಕ್‌ಡೌನ್‌ನಿಂದ ಅನುದಾನ ರಹಿತ ಶಾಲೆಗಳ 2 ಲಕ್ಷಕ್ಕೂ ಹೆಚ್ಚು ಶಿಕ್ಷಕರು ಕೆಲಸ ಮತ್ತು ವೇತನವಿಲ್ಲದೆ ಕಳೆದ ಆರು ತಿಂಗಳಿಂದ ಸಂಕಷ್ಟಕ್ಕೆ ಸಿಲುಕಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಹಾಗಿದ್ದಲ್ಲಿ, ಕೊರೋನ ಲಾಕ್‌ಡೌನ್ ಅವಧಿಯನ್ನು ಸೇವೆ ಎಂದು ಪರಿಗಣಿಸಿ ಅತಿಥಿ ಉಪನ್ಯಾಸಕರು ಹಾಗೂ ಅನುದಾನ ರಹಿತ ಶಾಲೆಗಳಲ್ಲಿ ಕೆಲಸ ಮಾಡುತ್ತಿರುವ ಶಿಕ್ಷಕರಿಗೆ ವಿಶೇಷ ಪ್ಯಾಕೇಜ್ ಮೂಲಕ ಧನ ಸಹಾಯ ನೀಡಲು ಸರಕಾರಕ್ಕೆ ಇರುವ ತೊಂದರೆಗಳೇನು;

(ಇ) ಈಗಲಾದರೂ ಸರ್ಕಾರ ಅನುದಾನ ರಹಿತ ಶಾಲೆಗಳ ನೌಕರರ ಮನವಿಯನ್ನು ಪರಿಗಣಿಸಿ ವಿಶೇಷ ಪ್ಯಾಕೇಜ್ ಮಂಜೂರು ಮಾಡಲು ಕ್ರಮ ಕೈಗೊಳ್ಳುವುದೇ?